ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1414
ಸದಸ್ಯರ ಹೆಸರು ಶ್ರೀ ಎಸ್.ನಾಗರಾಜ್ (ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ: 18-03-2020
ಉತ್ತರಿಸುವ ಸಚಿವರು: ಮಾನ್ಯ ಉಪ ಮುಖ್ಯಮಂತ್ರಿಗಳು ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಇಲಾಖೆ

| ಕ್ರಮ ಸಂಖ್ಯೆ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಕೊಳ್ಳೇಗಾಲ – ಮಹದೇಶ್ವರ ಬೆಟ್ಟ ನಡುವೆ ಇರುವ 80.00 ಕಿ.ಮೀ ರಸ್ತೆಯು ಕೊಳ್ಳೇಗಾಲ ಉಪ ವಿಭಾಗ ಮತ್ತು ಮಹದೇಶ್ವರ ಬೆಟ್ಟ ಉಪ ವಿಭಾಗಕ್ಕೆ ಸೇರುತ್ತಿದ್ದು, ಗುಂಡಿ ಬಿದ್ದು, ಹದಗೆಟ್ಟು ವಾಹನಗಳ ಸಂಚಾರಕ್ಕೆ ತೊಂದರೆ ಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಈ ಪ್ರಮುಖ ರಸ್ತೆಯಲ್ಲಿ ವರ್ಷವಿಡೀ ವಾಹನ ಸಂಚಾರವಿದ್ದು, ರಸ್ತೆಯಲ್ಲಿ; ಹೊಂಡಗಳು ಬಿದ್ದಿರುವುದರಿಂದ. ವಾಹನ ಸಂಚಾರಕ್ಕೆ ಅನಾನುಕೂಲವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಸಧ್ಯದಲ್ಲಿಯೇ ಯುಗಾದಿ, ದಸರಾ, ದೀಪಾವಳಿ ಅಮಾವಸ್ಯೆಗಳಲ್ಲಿ ಕಾಲ್ನಡಿಗೆ ಮತ್ತು ವಾಹನಗಳ ಮೂಲಕ ಲಕ್ಷಾಂತರ ಜನರು ಬೆಟ್ಟಕ್ಕೆ ಬರುತ್ತಿದ್ದು, ಸಾವಿರಾರು ವಾಹನಗಳು ಸಂಚರಿಸುವುದರಿಂದ ಈ ರಸ್ತೆಯನ್ನು ಕೂಡಲೇ ದುರಸ್ತಿ ಮಾಡಲು ಕ್ರಮ ಜರುಗಿಸಲಾಗುವುದೇ? | ಹನೂರು ತಾಲ್ಲೂಕು ಮಲೈ ಮಹದೇಶ್ವರಬೆಟ್ಟದ ರಸ್ತೆಯಲ್ಲಿ ಅಕ್ಟೋಬರ್-2019 ರಂದು ಬಿದ್ದ ಬಾರೀ ಮಳೆಯಿಂದ ರಸ್ತೆಯಲ್ಲಿ ಕೆಲವೊಂದು ಕಡೆಗಳಲ್ಲಿ ಗುಂಡಿಗಳು ಬಿದ್ದಿದ್ದು ಸರ್ಕಾರದ ಗಮನಕ್ಕೆ ಬಂದಿದೆ. ರಸ್ತೆಯಲ್ಲಿ ಬಿದ್ದಿರುವ ಗುಂಡಿಗಳನ್ನು ಲೋಕೋಪಯೋಗಿ ಇಲಾಖೆಯಿಂದ ವಾರ್ಷಿಕ ನಿರ್ವಹಣೆಯಡಿಯಲ್ಲಿ ಲಭ್ಯವಿರುವ ಅನುದಾನದಲ್ಲಿ ಗುಂಡಿ ಮುಚ್ಚಿ ರಸ್ತೆಯನ್ನು ವಾಹನಗಳ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡಲಾಗಿದೆ.<br><br>ಸದರಿ ರಸ್ತೆಯು ಕೊಳ್ಳೇಗಾಲ ಮತ್ತು ಮಲೇಮಹದೇಶ್ವರ ಬೆಟ್ಟ ಉಪವಿಭಾಗ ವ್ಯಾಪ್ತಿಯಲ್ಲಿದ್ದು, 2018-19ನೇ ಸಾಲಿನಲ್ಲಿ ಕೊಳ್ಳೇಗಾಲದಿಂದ ಹನೂರಿನವರೆಗೆ ಸರಪಳಿ ಸಂಖ್ಯೆ: 67.00 ರಿಂದ 72.70, 73.60 ರಿಂದ 74.30, 75.50 ರಿಂದ 82.30 ಹಾಗೂ 82.55 ರಿಂದ 85.60 ರವರೆಗೆ ರಾಜ್ಯಹೆದ್ದಾರಿ ನವೀಕರಣ ಅನುದಾನ ರೂ.300.00 ಲಕ್ಷದಲ್ಲಿ ಮರು ಡಾಂಬರೀಕರಣಗೊಳಿಸಿದ್ದು ಇದರ ನಿರ್ವಹಣಾ ಅವಧಿಯು ಮಾರ್ಚ್-2020 ರವರೆಗೆ ಇರುತ್ತದೆ. ಉಳಿದಂತೆ ರಸ್ತೆ ಗುಂಡಿಗಳು ಬಿದ್ದಿರುವ ಸರಪಳಿ ಸಂಖ್ಯೆ: 74.30 ರಿಂದ |

| | | |
|---|---|---|
| | | 75.50 ಮತ್ತು 82.30 ರಿಂದ 82.55 ಕಿ.ಮೀ.ವರೆಗೆನ ಭಾಗವನ್ನು 2019-20ನೇ ಸಾಲಿನ ವಾರ್ಷಿಕ ನಿರ್ವಹಣಾ ಕಾಮಗಾರಿಯಲ್ಲಿ ರೂ.3.00 ಲಕ್ಷಗಳ ಅನುದಾನದಲ್ಲಿ ರಸ್ತೆ ಗುಂಡಿಗಳನ್ನು ಮುಚ್ಚುವ ಕಾರ್ಯವನ್ನು ಕೈಗೊಳ್ಳಲಾಗಿರುತ್ತದೆ. ಸದರಿ ರಸ್ತೆಯಲ್ಲಿ ಪ್ರಸ್ತುತ ವಾಹನ ಸಂಚಾರ ಸುಗಮವಾಗಿರುತ್ತದೆ.<br><br>ಮಲೈ ಮಹದೇಶ್ವರಬೆಟ್ಟ ಉಪ ವಿಭಾಗ ವ್ಯಾಪ್ತಿಯ ಸರಪಳಿ ಸಂಖ್ಯೆ: 92.29 ಕಿ.ಮೀ ಹನೂರಿನಿಂದ ಪ್ರಾರಂಭಗೊಂಡು ಅಜ್ಜೀಪುರ, ರಾಮಾಪುರ, ಕೌದಳ್ಳಿ, ಮಲೈ ಮಹದೇಶ್ವರ ಬೆಟ್ಟದ ಮಾರ್ಗವಾಗಿ ಸರಪಳಿ 163.59 ಕಿ.ಮೀ ಪಾಲಾರ್ ಗ್ರಾಮದವರೆಗೆ (ಅಂತರ್‌ರಾಜ್ಯ ಗಡಿ) 71.30 ಕಿ.ಮೀ ಇರುತ್ತದೆ.<br><br>ಇದರಲ್ಲಿ ಪ್ರಸ್ತುತ 2019-20ನೇ ಸಾಲಿನಲ್ಲಿ ರಾಜ್ಯ ಹೆದ್ದಾರಿ ನಿರ್ವಾಹಣೆ ಅಡಿಯಲ್ಲಿ ಸರಪಳಿ 92.29 ರಿಂದ 94.21 ಕಿ.ಮೀ ವರೆಗೆ ಹಾಗೂ 103.50 ರಿಂದ 128.00 ಕಿ.ಮೀ ವರೆಗೆ (ಹನೂರಿನಿಂದ ಪ್ರಾರಂಭಗೊಂಡು ಅಜ್ಜೀಪುರ, ರಾಮಾಪುರ, ಕೌದಳ್ಳಿ ಮಾರ್ಗವಾಗಿ ತಾಳಬೆಟ್ಟದವರೆಗೆ) 26.42ಕಿ.ಮೀ ಉದ್ದಕ್ಕೆ ಅಂದಾಜು ಮೊತ್ತ ರೂ 34.00 ಲಕ್ಷಗಳಲ್ಲಿ ಮತ್ತು ಸರಪಳಿ 129.00 ರಿಂದ 163.59 ಕಿ.ಮೀ ವರೆಗೆ (ತಾಳಬೆಟ್ಟದಿಂದ ಪ್ರಾರಂಭಗೊಂಡು ಮಲೈ ಮಹದೇಶ್ವರ ಬೆಟ್ಟದ ಮಾರ್ಗವಾಗಿ ಪಾಲಾರ್ ಗ್ರಾಮದವರೆಗೆ) 34.59ಕಿ.ಮೀ ಉದ್ದಕ್ಕೆ ಅಂದಾಜು ಮೊತ್ತ ರೂ 48.00 ಲಕ್ಷಗಳಿಗೆ ಗುಂಡಿ ಮುಚ್ಚುವ ಕಾಮಗಾರಿಯನ್ನು ಕೈಗೊಂಡು, ಕಾಮಗಾರಿಯನ್ನು ಪೂರ್ಣ ಗೊಳಿಸಿದ್ದು ವಾಹನ ಮತ್ತು ಸಾರ್ವಜನಿಕರ ಸುಗಮ ಸಂಚಾರಕ್ಕೆ ಅನುಕೂಲ ಕಲ್ಪಿಸಲಾಗಿರುತ್ತದೆ. |

ಲೋಇ 31 ಸಿಕ್ಯೂಎನ್ 2020(ಇ)

(ಗೋವಿಂದ ಕಾರಜೋಳ)
ಉಪ ಮುಖ್ಯಮಂತ್ರಿಗಳು, ಲೋಕೋಪಯೋಗಿ
ಮತ್ತು ಸಮಾಜ ಕಲ್ಯಾಣ ಇಲಾಖೆ